# ಬರಾಕ್ ಓಬಾಮಾ

ಅನೇಕರಲ್ಲಿಯ ಒಬ್ಬ!



# ಬರಾಕ್ ಓಬಾಮಾ

## ಅನೇಕರಲ್ಲಿಯ ಒಬ್ಬ!



ಲೇಖಿಕೆಃ ಶಾನಾ ಕೋರಿ

ಚಿತ್ರಗಳುಃ ಜೇಮ್ಸ್ ಬರ್ನಾಂಡಿನ್

ಕನ್ನಡಕ್ಕೆ ಪ್ರಭಾಕರ ನಾನಾವಟಿ

ನಮ್ಮೆಲ್ಲರ ಹತ್ತಿರ ಒಂದಿಲ್ಲ ಒಂದು ಕತೆಗಳಿರುತ್ತವೆ. ಪ್ರತಿಯೊಬ್ಬರ ಹತ್ತಿರ ಇರುತ್ತವೆ.. ಇದು ಕೂಡ ಇಂತಹ ಕತೆಗಳಲ್ಲಿಯ ಒಂದು ಕತೆ. ಇದು ತೆಳ್ಳಗಿನ, ಒಂದು ವಿಚಿತ್ರ ಹೆಸರಿದ್ದ ಚಿಕ್ಕ ಹುಡುಗನ ಕತೆ. ಮತ್ತು ಅವನು ಅಮೇರಿಕೆಯ ಇತಿಹಾಸದ ಒಂದು ಪುಟವಾದ ಈ ಕತೆ.





ನೀವೆಲ್ಲರು ಅವನ ಬಗ್ಗೆ ಕೇಳಿರಬಹುದು. ಅವನ ಹೆಸರು ಬರಾಕ್ ಓಬಾಮಾ. ಅವನು ಅಮೇರಿಕೆ ಸಂಯುಕ್ತ ಸಂಸ್ಥಾನದ 44ನೆಯ ರಾಷ್ಟ್ರಾಧ್ಯಕ್ಷನಾದನು.

ಬರಾಕ್ ಓಬಾಮಾನ ಜನ್ಮವು ಹವಾಯಿಯಲ್ಲಿ 4 ಆಗಸ್ಟ 1961ರಂದು ಆಯಿತು.
ಬಿಳಿ ಹಾಗು ಕಪ್ಪು ವರ್ಣದ ಜನರು ಸರಿಸಮ ಆಗಲಾರರು ಎಂದು ನಂಬಿದ ಕಾಲವಿದು.
ಬರಾಕ್ ಓಬಾಮಾ ಇದನ್ನೆಲ್ಲ ಬದಲಾಯಿಸಿದನು.





ಬರಾಕ್ ಓಬಾಮಾನ ತಾಯಿ ಯಾನ್ ಶ್ವೇತ ವರ್ಣದವಳು. ಅವಳು ಕನ್ಸಾಸ ಎಂಬ ಪ್ರಾಂತದವಳು. ಓಬಾಮಾನ ತಂದೆ ಕೃಷ್ಣ ವರ್ಣದವನು. ಅವನು ಕೆನಿಯಾ ದೇಶದವನು. ಬರಾಕ್ ಎಂಬ ಹೆಸರು ಅವನ ತಂದೆಯಿಂದ ಬಂದದ್ದು.





ಬರಾಕ್ ಎರಡು ವರುಷದವನಿದ್ದಾಗ
ತಾಯಿ -ಮಗುವನ್ನು ತ್ಯಜಿಸಿ ಅವನ ತಂದೆ
ದೂರ ಹೋದರು. ಬರಾಕ್ ಮತ್ತು ಅವನ
ತಾಯಿ ಗ್ರಾಂಪ್ಸ ಎಂಬ ಅಜ್ಜನ ಹಾಗು
ಟೂಟ್ಸ ಎಂಬ ಅಜ್ಜಿಯ ಹತ್ತಿರ ಹೋಗಿ
ಇರತೊಡಗಿದರು

ಬರಾಕ್ ನ ತಾಯಿ ಹೇಳುತ್ತಿದ್ದ ಕತೆ-
ಪ್ರಸಂಗಗಳ ಮೂಲಕ ತಾನು
ಇನ್ನೂವರೆಗೂ ನೋಡದೆ ಇದ್ದ ತಂದೆಯ
ಬಗ್ಗೆ ಆತನು ಕಲ್ಪನೆ ಮಾಡುತ್ತಿದ್ದನು.

ಈ ಚಿಕ್ಕ ಮಗುವಿಗೆ ಹವಾಯಿ ಒಂದು ಸೋಜಿಗಗಳಿಸುವ ಸ್ಥಳವಾಗಿತ್ತು. ಬರಾಕ್ ಸಮುದ್ರ ದಂಡೆಯ ಮೇಲೆ ಆಟವಾಡುತ್ತಿದ್ದನು. ಆತನು ಹವಾಯಿಯ ವೈಶಿಷ್ಟ್ಯಪೂರ್ಣವಾದ ಅಕ್ಕಿಯಿಂದ ಮಾಡಿದ ಸಿಹಿ ತಿಂಡಿ ಮತ್ತು ಪೋಯಿ ಎಂಬ ತಿಂಡಿಯನ್ನು ತಿನ್ನುತ್ತಿದ್ದನು.





ತನ್ನ ಅಜ್ಜನ ಜತೆ ಮೀನುಗಳನ್ನು ಹಿಡಿಯಲು ಹೋಗುತ್ತಿದ್ದನು. ಅವನು ಹೋದಲ್ಲೆಲ್ಲ ಬೇರೆ ಬೇರೆ ವರ್ಣದ ಸಾಕಷ್ಟು ಜನರನ್ನು ಕಾಣುತ್ತಿದ್ದನು.



1967ರಲ್ಲಿ ಅವನ ತಾಯಿ ಮರುಮದುವೆಯಾದಳು. ಆತ ಮತ್ತು ಆತನ ತಾಯಿ ಇಂಡೋನೇಶಿಯಾಕ್ಕೆ ವಾಸಿಸಲು ಹೋದರು. ಇದು ಕೂಡ ಒಂದು ಸಾಹಸವೇ ಎಂದೆನ್ನಬಹುದು. ಬರಾಕ್ ನ ಮನೆಯ ಹಿತ್ತಿಲಲ್ಲಿಯ ಗಿಡಗಳ ಮೇಲೆ ಕೋತಿಗಳು ಜೋತುಬೀಳುತ್ತಿದ್ದವು. ಎರಡು ಮೊಸಳೆಯ ಮರಿಗಳು ಅವರ ಸಮೀಪದ ಕೊಳದಲ್ಲಿ ಈಜಾಡುತ್ತಿದ್ದವು. ಬರಾಕ್ ಮತ್ತು ಅವನ ಸಂಗಡಿಗರು ಸಾಕರ್ ಎಂಬ ಚೆಂಡೆಸೆಯುವ ಆಟವನ್ನು ಆಡುತ್ತಿದ್ದರು. ಹಾಗು ಕ್ರಿಕೆಟ ಎಂಬ ಗುಂಯಗುಡುವ ಕೀಟಕಗಳನ್ನು ಹಿಡಿಯುತ್ತದ್ದರು. ಬರಾಕ್ ನಿಗೆ ಕೆಲ ದಿನಗಳಲ್ಲಿ ಮಾಯಾ ಎಂಬ ಪುಟ್ಟ ತಂಗಿ ಕೂಡ ದೊರೆತಳು.

ಅಲ್ಲಿ ಕೆಲವು ನೋವು ಉಂಟುಮಾಡುವ ದೃಶ್ಯಗಳು ಕೂಡ ಅವನಿಗೆ ಕಂಡವು. ಅವನ ಅಕ್ಕಪಕ್ಕದಲ್ಲಿ ಅವನು ಓದುತ್ತಿರುವ ಪತ್ರಿಕೆಗಳಲ್ಲಿ ಅವನಂತಹ ಬಣ್ಣವಿರುವ ಜನರೇ ಇರಲಿಲ್ಲ. ಬರಾಕ್ ನು ಬೇರೆ ರೀತಿಯಾಗಿಯೇ ಕಾಣುತ್ತಿದ್ದನು. ಇದು ಹೀಗೇಕೆ ಎಂದು ಅವನು ಸೋಜಿಗಗೊಳ್ಳುತ್ತಿದ್ದನು.





ಅವನು ಸುತ್ತಮುತ್ತಲು ನೋಡಿದಾಗ ಸಾಕಷ್ಟು ಜನ ಬೇನೆಯಿಂದ ಬಳಲುತ್ತಿದ್ದದ್ದನ್ನು ಆತನು ಕಾಣುತ್ತಿದ್ದನು. ಎಷ್ಟೋ ಜನರು ಹಸಿವೆಯಿಂದ ಬಳಲುತ್ತಿದ್ದರು. ಬರಾಕ್ ನ ತಾಯಿ ತನ್ನ ಕೈಲಾದಷ್ಟು ಉಳಿದವರಿಗೆ ಸಹಾಯ ಮಾಡುತ್ತಿದ್ದಳು. ಆದರೆ ಎಲ್ಲರಿಗೂ ಸಹಾಯ ಒದಗಿಸಲು ಸಾಧ್ಯ-ವಾಗುತ್ತಿರಲಿಲ್ಲ.





ಬರಾಕ್ ನ ತಾಯಿಗೆ ಜೀವನದಲ್ಲಿ ಶಿಕ್ಷಣವು ಬಹು ಮಹತ್ವದ್ದೆಂದು ತಿಳಿದಿತ್ತು. ಅವಳು ಪುಸ್ತಕಗಳನ್ನು ಮತ್ತು ಭಾಷಣದ ಪ್ರತಿಗಳನ್ನು ಓದಲೆಂದು ತರುತ್ತಿದ್ದಳು. ಪ್ರತಿ ದಿನ ಮುಂಜಾನೆ ಬರಾಕ್ ನನ್ನು ಎಬ್ಬಿಸಿ ಓದಲು ಕೂಡಿಸುತ್ತಿದ್ದಳು.

ಅವಳು ಆತನಿಗೆ ತಾನು ಮನಗಂಡಿದ ಜೀವನ ಮೌಲ್ಯಗಳನ್ನು ಕಲಿಸುತ್ತಿದ್ದಳು. ನ್ಯಾಯ, ಪ್ರಾಮಾಣಿಕತೆ ಮತ್ತು ಪರಿಶ್ರಮಗಳು ಎಲ್ಲಕ್ಕಿಂತ ಮಹತ್ವದ್ದಿವೆ ಮತ್ತು ಎಲ್ಲ ಜನರು ಆಂತರಿಕದಲ್ಲಿ ಸರಿಸಮಾನರು ಎಂಬುದನ್ನು ಅವಳು ಅವನಿಗೆ ಕಲಿಸಿದಳು.



ಬರಾಕ್ ನು ಬಹು ಜಾಣನು. ಆದರೆ ಅವನು ಅಷ್ಟೊಂದು ನುರಿತವ-ನಾಗಿರಲಿಲ್ಲ. ಎಷ್ಟೋ ಸಲ ಅವನು ತನ್ನಷ್ಟಕ್ಕೆ ತನ್ನಲ್ಲಿ ನೊಂದುಕೊಳ್ಳುತ್ತಿದ್ದನು. ಅದೆಷ್ಟೋ ಸಲ ಸಿಟ್ಟಿಗೇಳುತ್ತಿದ್ದನು. ಆದರೂ ತಾನು ಇದೆಲ್ಲದರಲ್ಲಿ ಹೇಗೆ ಹೊಂದಿಕೊಳ್ಳುವೆ ಎಂದು ಅಚ್ಚರಿ ಪಡುತ್ತಿದ್ದನು.

ಹತ್ತು ವರುಷದವನಿದ್ದಾಗ ಬರಾಕ್ ನಿಗೆ ಹವಾಯಿಯಲ್ಲಿಯ ಶಾಲೆಯಲ್ಲಿ ಕಲಿಯಲು ಶಿಷ್ಯವೇತನ ದೊರೆಯತೊಡಗಿತು. ಆತನು ತನ್ನ ಅಜ್ಜ ಗ್ರಾಂಪ್ಸ ಮತ್ತು ಅಜ್ಜಿ ಟೂಟ್ಸ ಹತ್ತಿರ ಅಮೇರಿಕೆಯಲ್ಲಿ ಇರತೊಡಗಿದನು. ಅವನ ತಾಯಿ ಮತ್ತು ತಂಗಿ ಮಾಯಾ ಮರುವರುಷ ಅವನ ಜತೆ ಬಂದು ಸೇರಿದರು.



ಆ ಚಳಿಗಾಲದಲ್ಲಿ ಅವನ ತಂದೆ ಭೆಟ್ಟಿಯಾಗಲು ಬಂದರು. ಅವನಿಗೆ ಒಂದು ಬಾಸ್ಕೆಟ ಚೆಂಡನ್ನು ಕಾಣಿಕೆಯೆಂದು ಕೊಟ್ಟರು. ದಿನನಿತ್ಯ ಬರಾಕ್ ನು ಚೆಂಡಾಟದ ಅಭ್ಯಾಸ ಮಾಡುತ್ತಿದ್ದನು. ಅಜ್ಜಿ ಟೂಟ್ಸ ಕೂಡ ಅವನನ್ನು ಹುರಿದುಂಬಿಸುತ್ತಿದ್ದಳು.





ಶಾಲೆಯನ್ನು ಆತನು ಬಾಸ್ಕೆಟ್ ಬಾಲ್ ದ ತಂಡವನ್ನು ಸೇರಿದನು. ತನ್ನ ಸಂಗಡಿಗರ ಜತೆ ಆಟದಲ್ಲಿ ಗೋಲ ಮಾಡುವದು ಬಹಳ ಸೇರುತ್ತಿತ್ತು. ಕೊನೆಯಲ್ಲಿ ಆತನು ಎಲ್ಲರ ಜತೆ ಹೊಂದಿಕೊಳ್ಳತೊಡಗಿದನು.

ಬರಾಕ್ ಕಾಲೇಜಿಗೆ ಹೋಗತೊಡಗಿದನು. ಸಂಗ್ರಹಾಲಯಗಳಿಗೆ ಭೆಟ್ಟಿ ಕೊಡತೊಡಗಿದನು. ಹಿರಿಯರ ಭಾಷಣಗಳನ್ನು ಕೇಳತೊಡಗಿದನು. ಪ್ರವಾಸದಲ್ಲಿ ಮತ್ತು ವಿಚಾರ ಮಾಡುವದರಲ್ಲಿ ಅವನು ಸಾಕಷ್ಟು ಸಮಯ ಕಳೆಯತೊಡಗಿದನು. ಅವನಿಗೆ ಬಡ ಇಂಡೋನೇಶಿಯಾದ ನೆನಪು ಆಗುತ್ತಿತ್ತು. ತಾಯಿಯು ತನ್ನ ದೇಶದ ಬಗ್ಗೆ ಹೇಳಿದ ಪಾಠಗಳನ್ನು ಅವನು ನೆನಪಿಸ-ತೊಡಗಿದನು.

ಈ ಮೊದಲು ಕಪ್ಪು ಬಣ್ಣದ ಮಕ್ಕಳಿಗೆ ಶಾಲೆಗಳಲ್ಲಿ ಪ್ರವೇಶವಿರಲಿಲ್ಲ. ಅವರು ಸಾರ್ವಜನಿಕ ನಲ್ಲಿಯನ್ನು ಉಪಯೋಗಿಸಲು ನಿರ್ಬಂಧನೆಗಳಿದ್ದವು. ಕೃಷ್ಣ ವರ್ಣದ ಜನರಿಗೆ ಓಟು ನೀಡುವ ಹಕ್ಕುಗಳಿರಲಿಲ್ಲ. ಇದೆಲ್ಲವುಗಳನ್ನು ಬದಲಿಸಲು ಹೋರಾಡಿದ ಮುಂದಾಳುಗಳು ಅವನನ್ನು ಪ್ರೇರೇಪಿಸುತ್ತಿದ್ದರು.







ಕಾಲೇಜಿನ ಶಿಕ್ಷಣ ಮುಗಿಸಿದ ನಂತರ ಅವನಿಗೆ ಒಂದು ನೌಕರಿ ದೊರೆಯಿತು. ಅವನು ಮತದಾರರ ದಾಖಲೆ ಮಾಡಲು ಸಹಾಯ ಮಾಡತೊಡಗಿದನು. ಅವನು ಮಕ್ಕಳಿಗಾಗಿ ಶಾಲೆ ಮುಗಿದ ನಂತರದ ವೇಳೆಯಲ್ಲಿ ಮಾಡಬಹುದಾದ ಕಾರ್ಯಕ್ರಮಗಳ ಬಗ್ಗೆ ಯೋಚಿಸತೊಡಗಿದನು. ಇತರರಿಗೆ ಸಹಾಯ ಮಾಡುತ್ತಿರುವಾಗ ಈ ಸಮಾಜದಲ್ಲಿಯ ತನ್ನ ಸ್ಥಾನದ ಅರಿವು ಅವನಿಗೆ ಆಗತೊಡಗಿತು.

“ಅಮೇರಿಕೆಯ ದೊಡ್ಡ ಇತಿಹಾಸದ ಕತೆಯಲ್ಲಿ ತನ್ನ ಕತೆ ಹೇಗೆ ಹೊಂದಿಕೊಳ್ಳಬಹುದು ಎಂಬುದರ ಅರಿವು ನನಗೆ ಆಗತೊಡಗಿತು”. ಎಂದು ಒಮ್ಮೆ ಅವನು ಹೇಳಿದನು.

ಬರಾಕ್ ನಿಗೆ ಅನ್ಯಾಯದ ಮತ್ತು ಅಂತಹ ಕಾನೂನುಗಳ ವಿರುದ್ಧ ಹೋರಾಟ ಮಾಡಬೇಕೆಂದು ಅನ್ನಿಸತೊಡಗಿತು. ಬಿಸಿಲು ಕಾಲದ ಒಂದು ದಿನ ಅವನಿಗೆ ಮಿಶೆಲ್ ಎಂಬ ತರುಣ ವಕೀಲಳ ಪರಿಚಯವಾಯಿತು. ಬರಾಕ್ ಅವಳ ಜತೆ ಮದುವೆ ಮಾಡಿಕೊಂಡನು.





ಅವರಿಗೆ ಮಾರಿಯಾ ಮತ್ತು ಸಾಶಾ ಎಂಬ ಎರಡು ಹೆಣ್ಣು ಮಕ್ಕಳಾದವು.

ಈಗಿನ ಶಾಸನವು ಸಾಮಾನ್ಯರ ಜೀವನಮಟ್ಟವನ್ನು ಏರಿಸಬಹುದು ಎಂಬ ಭರವಸೆ ಅವರಿಗೆ ಇತ್ತು. ಆದ್ದರಿಂದ ಅವರು ರಾಜ್ಯದ ಸೆನೆಟರ ಆದರು. 2004ರಲ್ಲಿ ಅಮೇರಿಕೆಯ ಸೆನೆಟ ಚುನಾವಣೆಗೆ ನಿಂತರು ಮತ್ತು ಅದರಲ್ಲಿ ಯಶಸ್ಸನ್ನು ಸಂಪಾದಿಸಿದರು. ಆ ತಿಂಗಳು ಅವರು ಒಂದು ಮಹತ್ವಪೂರ್ಣವಾದ ಭಾಷಣವನ್ನು ಮಾಡಿದರು.

ತಮ್ಮ ತಾಯಿ ಕಲಿಸಿದ ಮೌಲ್ಯಗಳ ಬಗ್ಗೆ ಅವರು ಮಾತಾಡಿದರು. “ಎಲ್ಲ ಅಮೇರಿಕನ್ ರು ಒಂದೇಯಾಗಿದ್ದು ಎಲ್ಲರೂ ಸರಿಸಮಾನರು. ಇಲ್ಲಿ ಕಪ್ಪು ಅಮೇರಿಕಾ, ಬಿಳಿ ಅಮೇರಿಕಾ, ಏಶಿಯನ್ ಅಮೇರಿಕಾ, ಲ್ಯಾಟಿನ್ ಅಮೇರಿಕಾ ಮುಂತಾದವುಗಳು ಇಲ್ಲವೇ ಇಲ್ಲ. ಕೇವಲ ಯುನಾಯಟೆಡ್ ಸ್ಟೇಟ್ಸ ಆಫ್ ಅಮೇರಿಕಾ ಮಾತ್ರ ಇದೆ.” ಎಂದು ಅವರು ಹೇಳಿದರು.





ಬರಾಕ್ ಇವರ ಈ ಮಾತುಗಳು ಜನರ ಆಶೆಯನ್ನು ಹೆಚ್ಚಿಸಿದವು. ಅಮೇರಿಕಾ ಯುದ್ಧಕ್ಕೆ ಅಣಿಯಾಗಿತ್ತು. ಜನರ ಕೈಗಳಿಗೆ ಕೆಲಸ ಬೇಕಿತ್ತು. ಜನರಿಗೆ ಆರೋಗ್ಯ ಸೌಕರ್ಯಗಳು ಬೇಕಿದ್ದವು. ಜನರು ಬರಾಕ್ ಇವರ ಮಾತುಗಳನ್ನು ಆಲಿಸಿದರು. ಅಮೇರಿಕೆಯಲ್ಲಿ ಬದಲಾವಣೆ ಆಗಬಹುದು ಎಂದು ಸಾಮಾನ್ಯ-ರೆಲ್ಲರಿಗೂ ಅನ್ನಿಸತೊಡಗಿತು. ಅಮೇರಿಕೆ ಏಳಿಗೆ ಸಾಧಿಸಬಹುದು ಎಂಬ ಭರವಸೆ ಜನರಲ್ಲಿ ಮೂಡತೊಡಗಿತು. ಜನರು ಬರಾಕ್ ಇವರನ್ನು ರಾಷ್ಟ್ರಾಧ್ಯಕ್ಷರಾಗಲು ಒತ್ತಾಯಿಸತೊಡಗಿದರು.



ಇಲ್ಲಿಯವರೆಗೂ ಆಫ್ರಿಕನ್ ವಂಶದ ಅಮೇರಿಕನ್ ರಾಷ್ಟ್ರಾಧ್ಯಕ್ಷನಾಗಿರಲಿಲ್ಲ. ಅಮೇರಿಕನ್ ರು ಆಫ್ರಿಕನ್ ವಂಶದ ಅಮೇರಿಕನ್ ನಿಗೆ ಓಟು ಕೊಡಲಾರರು ಎಂದು ಅವರಿಗೆ ಅನ್ನಿಸುತ್ತಿತ್ತು. ಆದರೆ ಬರಾಕ್ ಓಬಾಮಾ ಇವರಿಗೆ ಜನರಿಗಿಂತ ಹೆಚ್ಚು ತಿಳಿಯುತ್ತಿತ್ತು. 10 ಫೆಬ್ರುವರಿ 2007 ರಂದು "ನಾನು ಅಮೇರಿಕನ್ ರಾಷ್ಟ್ರಾಧ್ಯಕ್ಷ ಪದದ ಚುನಾವಣೆಗೆ ನಿಲ್ಲುವೆ." ಎಂದು ಓಬಾಮಾ ಜಾಹೀರ ಪಡಿಸಿದರು.



“ನಾವೆಲ್ಲ ಅಮೇರಿಕನ್ ರು ಒಟ್ಟುಗೂಡಿ ಒಂದು ಒಳ್ಳೆಯ ಜಗತ್ತನ್ನು ನಿರ್ಮಿಸುವ.” ಎಂದು ಕರೆ ಕೊಟ್ಟರು. ತರುಣ-ತರುಣಿಯರು ಮತ್ತು ಚಿಕ್ಕ ಮಕ್ಕಳು ಕೂಡ ಚುನಾವಣೆ ಪ್ರಚಾರದಲ್ಲಿ ಪಾಲುಗೊಂಡರು. “ನಮ್ಮಲ್ಲಿಯ ಪ್ರತಿಯೊಬ್ಬನಿಗೂ ತಮ್ಮದೇ ಆದ ಕನಸನ್ನು ಕಾಣುವ ಸ್ವಾತಂತ್ರ್ಯವಿದೆ. ಆದರೆ ನಾವೆಲ್ಲರು ಒಂದೇ ಗುರಿ ಮುಟ್ಟುವದಕ್ಕಾಗಿ ಹೋರಾಡಬೇಕು.” ಎಂದು ಅವರು ಒತ್ತಾಯಿಸಿದರು.



ಮುಂದಿನ ಎಷ್ಟೋ ತಿಂಗಳು ಬರಾಕ್ ಇವರು ಅಮೇರಿಕೆಯ ಎಲ್ಲ ಪಟ್ಟಣಗಳಿಗೆ ಭೆಟ್ಟಿ ಕೊಟ್ಟರು. ಮುಂಬರುವ ಬದಲಾವಣೆಗಳ ಬಗ್ಗೆ ವಿಚಾರ ವಿನಿಮಯ ಮಾಡಿದರು. ಪರಸ್ಪರ ಸಹಾಯ ಮಾಡುವದರ ಬಗ್ಗೆ ಮಾತಾಡಿದರು.

ಅವರು ತಮ್ಮ ಮುಂಬರುವ ಯೋಜನೆಗಳ ಬಗ್ಗೆ ಸಂವಾದ ಸಾಧಿಸುತ್ತಿದ್ದಂತೆ ಜನರೆಲ್ಲ ಆಕರ್ಷಿತರಾಗತೊಡಗಿದರು. ಪ್ರತಿಯೊಂದು ರಾಜ್ಯದಲ್ಲಿ ಇವರಿಗಾಗಿ ದುಡಿಯುವ ಸ್ವಯಂಸೇವಕರು ದೊರೆತರು. ಇವರೆಲ್ಲರು ಸ್ನೇಹಭೋಜನ ಮತ್ತು ಸಮಾರಂಭಗಳನ್ನು ಆಯೋಜಿಸಿ ಓಬಾಮಾ ಇವರ ಪ್ರಚಾರ ಮಾಡತೊಡಗಿದರು.






ಅವರೆಲ್ಲ ಎಲ್ಲ ಕಡೆಗೂ ಭಿತ್ತಿಚಿತ್ರಗಳನ್ನು ಅಂಟಿಸತೊಡಗಿದರು. ಕರಪತ್ರಗಳನ್ನು ಹಂಚತೊಡಗಿದರು. ಮನೆ ಮನೆಗೆ ಹೋಗಿ ಬರಾಕ್ ನಿಗೆ ಓಟು ಕೊಡಬೇಕೆಂದು ಬಿನ್ನವಿಸುತ್ತಿದ್ದರು.

ಕೊನೆಗೊಮ್ಮೆ ಚುನಾವಣೆಯ ದಿನ ಬಂದೇ ಬಿಟ್ಟಿತು ಇಡೀ ದೇಶದ ಜನರೆಲ್ಲ ಓಟು ಕೊಡಲು ಮುಂದಾದರು. ವೃದ್ಧರು, ತರುಣ-ತರುಣಿಯರು, ಎಲ್ಲ ವರ್ಣದವರು, ಎಲ್ಲ ವಂಶದವರು ಕೂಡಿ 13 ಕೋಟಿಗಿಂತ ಹೆಚ್ಚು ಜನರೆಲ್ಲರು ಓಟು ಕೊಡಲು ಹೊರಬಿದ್ದರು.

ಸಾಕಷ್ಟು ಜನರು ಬೇಸರ ಪಡೆಯದೆ ಉದ್ದಾದ ಸಾಲುಗಳಲ್ಲಿ ಓಟು ಕೊಡಲು ನಿಂತರು. ಎಷ್ಟೋ ಜನರು ಅಂಚೆ ಮೂಲಕ ಓಟು ಕೊಟ್ಟರು. ಇನ್ನೂವರೆಗೂ ಓಟು ಕೊಡದವರು ಕೂಡ ಈ ಸಲ ಓಟು ಕೊಟ್ಟರು. ಇವರೆಲ್ಲ ಅಮೇರಿಕೆಯ ಇತಿಹಾಸದ ಭಾಗವಾದರು.





ಓಟುಗಳ ಎಣಿಕೆ ಮಾಡಿದಾಗ
ಬರಾಕ್ ಓಬಾಮಾ ಇವರು
ಚುನಾವಣೆ ಗೆದ್ದಿದ್ದರು. ಸುಮಾರು
ಆರೂವರೆ ಕೋಟಿ ಜನರು ಅವರಿಗೆ
ಓಟು ಕೊಟ್ಟಿದ್ದರು. ಇಲ್ಲಿಯವರೆಗೆ
ನಡೆದ ರಾಷ್ಟ್ರಾಧ್ಯಕ್ಷರ ಯಾವದೇ
ಚುನಾವಣೆಗಳಲ್ಲಿಕ್ಕಿಂತ ಈ
ಚುನಾವಣೆಯಲ್ಲಿ ಓಟು ಕೊಟ್ಟವರ
ಸಂಖ್ಯೆ ಹೆಚ್ಚು ಇತ್ತು.




ಜನರೆಲ್ಲ ಅತೀ ಉತ್ಸಾಹದಿಂದ ಬೀದಿಗಳಿಗೆ ಇಳಿದು ಓಬಾಮಾರ ಯಶಸ್ಸನ್ನು ಆನಂದದಿಂದ ಅನುಭವಿಸಿದರು. ಹಾರ್ಲೆಮದಿಂದ ಹವಾಯಿಯವರೆಗೆ, ಕನ್ಸಾಸದಿಂದ ಕೆನಿಯಾದ ವರೆಗೆ ಜನರೆಲ್ಲ ಕುಣಿದಾಡಿದರು, ಹಾಡಿದರು ಹಾಗು ಒಬ್ಬರನ್ನೊಬ್ಬರು ಅಪ್ಪಿಕೊಂಡರು.

ಎಲ್ಲರಿಗೂ ಸಂತಸವಾಗಿತ್ತು. “ ಇದೇ ದೇಶದಲ್ಲಿ ಇಂತಹದು ಸಂಭವಿಸುವದು.” ಎಂದು ಓಬಾಮಾ ಹೇಳುತ್ತಿದ್ದರು.



ಒಬಾಮಾ ಇವರ ಅಂದಾಜು ಸರಿಯಾಗಿದ್ದಿತು.
20 ಜಾನೇವರಿ 2009 ರಂದು ಬರಾಕ್ ಒಬಾಮಾ ಅಮೇರಿಕೆಯ ರಾಷ್ಟ್ರಾಧ್ಯಕ್ಷರಾದರು. 10 ಲಕ್ಷಕ್ಕೂ ಮೀರಿ ಜನರು ಅಮೇರಿಕೆಯ ರಾಜಧಾನಿಯಾದ ವಾಶಿಂಗ್ಟನ್ನಿಗೆ ರಾಷ್ಟ್ರಾಧ್ಯಕ್ಷ ಪದ ಸ್ವೀಕರಿಸುವ ಸಮಾರಂಭಕ್ಕೆ ನೆರೆದರು. ಲಕ್ಷಾನುಗಟ್ಟಲೆ ಜನ ಈ ಸಮಾರಂಭವನ್ನು ಟಿವಿಯ ಮೇಲೆ ವೀಕ್ಷೀಸಿದರು.

ಇಡೀ ಜಗತ್ತಿನಲ್ಲಿಯ ಎಲ್ಲ ವರ್ಣದ ಮತ್ತು ವಂಶದ ಜನರು ಒಟ್ಟುಗೂಡಿ ಓಬಾಮಾ ಇವರ ಮೊದಲನೆಯ ಭಾಷಣವನ್ನು ಕೇಳಿದರು. ರಾಷ್ಟ್ರಾಧ್ಯಕ್ಷರು ತಮ್ಮ ತಾಯಿ ಕಲಿಸಿದ ಜೀವನದ ಮೌಲ್ಯಗಳ ಬಗ್ಗೆ ಮಾತಾಡಿದರು. "ಎಲ್ಲರು ಕೂಡಿ ಕೆಲಸ ಮಾಡುವ, ನಾವೆಲ್ಲರು ಸೇರಿ ಒಂದು ಇತಿಹಾಸವನ್ನು ನಿರ್ಮಿಸುವ ಸಮಯ ಬಂದಿದೆ" ಎಂದು ಅವರು ತಮ್ಮ ಭಾಷಣದಲ್ಲಿ ಹೇಳಿದರು.
ಈ ರೀತಿಯಾಗಿ ಅಮೇರಿಕೆಯ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು.

ಆದರೆ ಇದು ಇನ್ನೂ ಮುಗಿದಿಲ್ಲ.

ಇದು ಪ್ರಾರಂಭವಷ್ಟೇ!



ಅಮೇರಿಕೆಯ ಕತೆಯಲ್ಲಿ ನಿಮ್ಮ ಕತೆ ಹೇಗೆ ಹೊಂದಿಕೊಳ್ಳುತ್ತದೆ ನೀವು ಶಾಲೆಯಲ್ಲಿಯ ನೆರೆಹೊರೆಯರಿಗೆ ಸಹಾಯ ಮಾಡಬಹುದು.

ಒಂದು ದಿನ ನೀವು ಕೂಡ ರಾಷ್ಟ್ರಾಧ್ಯಕ್ಷ ರಾಗಬಹುದು. ಮುಂದೆ ಹೋಗುವದಕ್ಕೆ ನೀವೆ ಹೊಣೆಗಾರರು.



ಮುಕ್ತಾಯ